# ಕರ್ನಾಟಕ ವಿಧಾನಪರಿಷತ್ತು

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 609 (693) |
| 2. | ಸದಸ್ಯರ ಹೆಸರು | : | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3. | ಉತ್ತರಿಸಬೇಕಾದ ದಿನಾಂಕ | : | 22.02.2022 |
| 4. | ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

| ಪ್ರಶ್ನೆ | ಉತ್ತರ |
|---|---|
| ಅ) ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ರಾಜ್ಯದ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ದೀರ್ಘಾವಧಿ ಹಣದ ಅಗತ್ಯತೆಗಳನ್ನು ಪೂರೈಸಲು ನೆರವು ಒದಗಿಸಲಾಗುತ್ತಿದೆಯೇ, ಹಾಗಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಎಷ್ಟು ಕೈಗಾರಿಕೆಗಳಿಗೆ ನೆರವು ಒದಗಿಸಲಾಗಿದೆ (ಜಿಲ್ಲಾವಾರು ವಿವರ ನೀಡುವುದು). | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ರಾಜ್ಯದ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ದೀರ್ಘಾವಧಿ ಹಣದ ಅಗತ್ಯತೆಗಳನ್ನು ಪೂರೈಸಲು ನೆರವು ನೀಡಲಾಗುತ್ತಿದ್ದು, ಕಳೆದ 3 ವರ್ಷಗಳಲ್ಲಿ ನೀಡಿರುವ ಜಿಲ್ಲಾವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ) ಈ ಸಂಸ್ಥೆಯ ಮೂಲಕ ಸಮಾಜದ ದುರ್ಬಲ ವರ್ಗಗಳ ಉದ್ಯಮಿಗಳಿಗೆ / ಮೊದಲ ಪೀಳಿಗೆ ಉದ್ಯಮಿಗಳಿಗೆ ಯಾವ ಯಾವ ಯೋಜನೆಗಳನ್ನು ರೂಪಿಸಿ ನೆರವು ನೀಡಲಾಗುತ್ತಿದೆ; ಇರುವಂತಹ ಯೋಜನೆಗಳಾವುವು (ಸಂಪೂರ್ಣ ವಿವರ ನೀಡುವುದು). | ಸಂಸ್ಥೆಯು ಸಮಾಜದ ದುರ್ಬಲ ವರ್ಗಗಳ ಉದ್ಯಮಿಗಳಿಗೆ / ಮೊದಲ ಪೀಳಿಗೆ ಉದ್ಯಮಿಗಳಿಗೆ ರೂಪಿಸಿರುವ ಯೋಜನೆಗಳ ವಿವರ :<br>1. ಪರಿಶಿಷ್ಟ ಜಾತಿ / ಪಂಗಡದ ಉದ್ದಿಮೆದಾರರಿಗೆ ಬಡ್ಡಿ ಸಹಾಯಧನ ಯೋಜನೆ:<br>• ಪರಿಶಿಷ್ಟ ಜಾತಿ / ಪಂಗಡದ ಉದ್ದಿಮೆದಾರರು ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಗಾತ್ರದ ಕೈಗಾರಿಕಾ ಘಟಕಗಳಿಗೆ ಮತ್ತು ಸೇವಾ ಕ್ಷೇತ್ರದ ಉದ್ದಿಮೆಗಳ ಸ್ಥಾಪನೆಗೆ ಹಾಗೂ ವಾಣಿಜ್ಯ ಕಟ್ಟಡ ನಿರ್ಮಾಣಕ್ಕೆ ಶೇ.4ರ ವಾರ್ಷಿಕ ಬಡ್ಡಿ ದರದಲ್ಲಿ ಅವಧಿಸಾಲವನ್ನು ನೀಡಲಾಗುತ್ತಿದೆ. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯಿಂದ ಮರುಪಾವತಿಸಲಾಗುತ್ತದೆ. ಈ ಯೋಜನೆಯಡಿ ಕನಿಷ್ಠ 10.00 ಲಕ್ಷ ರೂ.ಗಳಿಂದ ಗರಿಷ್ಠ 10.00 ಕೋಟಿ ರೂ.ಗಳವರೆಗೆ ಸಾಲದ ನೆರವು ದೊರೆಯುತ್ತದೆ. ಶೇ.4ರ ವಾರ್ಷಿಕ ಬಡ್ಡಿ ದರದಲ್ಲಿ ನೀಡಲಾಗುವ ಅವಧಿ ಸಾಲದ ಮರುಪಾವತಿಯ ಅವಧಿಯು ಗರಿಷ್ಠ 8 ವರ್ಷ. |

| | |
|---|---|
| | • ಪರಿಶಿಷ್ಟ ಜಾತಿ / ಪಂಗಡದ ಉದ್ಯಮಿಗಳಿಗಾಗಿ ಅತಿ ಸಣ್ಣ ಮತ್ತು ಸಣ್ಣ ಪ್ರಮಾಣದ ಯೋಜನಾ ವೆಚ್ಚ ರೂ.2.00 ಕೋಟಿ ಮೀರದ ಕೈಗಾರಿಕೆಗಳನ್ನು ಹೊಸದಾಗಿ ಸ್ಥಾಪಿಸುವವರಿಗೆ ಪೂರಕ ಭದ್ರತೆ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.<br>2.ಎಲ್ಲಾ ವರ್ಗದ ಉದ್ದಿಮೆದಾರರಿಗೆ ಮೊದಲ ಪೀಳಿಗೆಯವರು ಸೇರಿದಂತೆ ಬಡ್ಡಿ ಸಹಾಯಧನ ಯೋಜನೆ:<br>ಸೂಕ್ಷ್ಮ ಹಾಗೂ ಸಣ್ಣ ಪ್ರಮಾಣದ ಹೊಸ ಮತ್ತು ಹಾಲಿ ಕೈಗಾರಿಕಾ ಘಟಕಗಳು ಉತ್ಪಾದನೆಗೆ ಉಪಯೋಗಿಸುವ ಕಟ್ಟಡ ಮತ್ತು ಯಂತ್ರೋಪಕರಣಗಳಿಗೆ, ಕನಿಷ್ಠ ರೂ.5.00 ಲಕ್ಷ ಗರಿಷ್ಠ ರೂ.500.00 ಲಕ್ಷದವರೆಗೆ ಅವಧಿ ಸಾಲ. ಈ ಯೋಜನೆಯು ದಿನಾಂಕ 01.10.2018ರಿಂದ ಜಾರಿಯಲ್ಲಿದೆ. ಈ ಮೊದಲು ಮೊದಲ ಪೀಳಿಗೆ ಉದ್ದಿಮೆದಾರರಿಗೆ ಈ ಯೋಜನೆಯಡಿಯಲ್ಲಿ ನೆರವು ನೀಡಲಾಗುತ್ತಿತ್ತು. ಈ ಯೋಜನೆ ಅನ್ವಯ ಅರ್ಹ ಉದ್ದಿಮೆದಾರರಿಗೆ ಶೇ.6 ರಷ್ಟು ಬಡ್ಡಿ ದರದಲ್ಲಿ ಸಾಲದ ಸೌಲಭ್ಯ ನೀಡಲಾಗುವುದು. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರದ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯಿಂದ ಮರುಪಾವತಿಸಲಾಗುತ್ತದೆ.<br>3. ಮಹಿಳಾ ಉದ್ದಿಮೆದಾರರಿಗೆ ಬಡ್ಡಿ ಸಹಾಯಧನ ಯೋಜನೆ:<br>ಈ ಯೋಜನೆಯಡಿ ಸೇವಾ ಕ್ಷೇತ್ರದಲ್ಲಿ ಸಣ್ಣ ಹಾಗೂ ಮಧ್ಯಮ ವರ್ಗದ ಘಟಕಗಳನ್ನು ಸ್ಥಾಪಿಸುವ ಮಹಿಳಾ ಉದ್ದಿಮೆದಾರರಿಗೆ 200.00 ಲಕ್ಷ ರೂ.ಗಳವರೆಗೆ ಶೇ.4 ರಷ್ಟು ಬಡ್ಡಿ ದರದಲ್ಲಿ ಸಾಲದ ಸೌಲಭ್ಯ ನೀಡಲಾಗುವುದು. ಕೆ.ಎಸ್.ಎಫ್.ಸಿ. ವಿಧಿಸುವ ಸಾಮಾನ್ಯ ಬಡ್ಡಿ ದರದ ವ್ಯತ್ಯಾಸ ಮೊತ್ತವನ್ನು ಬಡ್ಡಿ ಸಹಾಯಧನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಮರುಪಾವತಿಸಲಾಗುತ್ತದೆ.<br>ಕಳೆದ ಮೂರು ವರ್ಷಗಳಲ್ಲಿ ರಾಜ್ಯ ಸರ್ಕಾರದ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಸಂಸ್ಥೆಯು ನೀಡಿರುವ ನೆರವಿನ ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

| | |
|---|---|
| ಇ)ಸಂಸ್ಥೆಯ ಯೋಜನೆಗಳು ಹಾಗೂ ಸವಲತ್ತುಗಳ ಬಗ್ಗೆ ಗ್ರಾಮೀಣ ಭಾಗದಲ್ಲಿ ಸರಿಯಾದ ಮಾಹಿತಿ ಇಲ್ಲದೇ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆದಾರರು ಸೌಲಭ್ಯ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ? (ಸಂಪೂರ್ಣ ವಿವರ ನೀಡುವುದು). | ಪ್ರತಿಯೊಂದು ಜಿಲ್ಲೆಯಲ್ಲಿಯೂ ಸಂಸ್ಥೆಯ ಶಾಖಾ ಕಚೇರಿಗಳು ಸ್ಥಾಪಿತವಾಗಿದೆ. ಈ ಶಾಖಾ ಕಛೇರಿಗಳು ಗ್ರಾಮಾಂತರ ಜಿಲ್ಲೆಯ ಜನ ಸಾಮಾನ್ಯರಿಗೆ / ಗ್ರಾಹಕರಿಗೆ ಮಾಹಿತಿ ಮತ್ತು ಸಾಲ ನೀಡುವ ಮೂಲಕ ಸೇವೆ ಸಲ್ಲಿಸುತ್ತಿದೆ. ಪ್ರತಿಯೊಂದು ಶಾಖಾ ಕಛೇರಿಯಲ್ಲಿಯೂ ಉದ್ಯಮಿಗಳ ಹಾಗೂ ಗ್ರಾಹಕರ ಮಾರ್ಗದರ್ಶನಕ್ಕಾಗಿ ಅನುಭವವುಳ್ಳ ಅಧಿಕಾರಿಗಳು ಇದ್ದು ಶಾಖಾ ಕಚೇರಿಗೆ ಭೇಟಿ ನೀಡುವ ಉದ್ಯಮಿಗಳಿಗೆ ಹಾಗೂ ಗ್ರಾಹಕರಿಗೆ ಸಂಸ್ಥೆಯ ಸಾಲ ಯೋಜನೆಗಳ ಬಗ್ಗೆ ಸೂಕ್ತ ಮಾಹಿತಿಯನ್ನು ನೀಡುತ್ತಾರೆ. ಸಂಸ್ಥೆಯ ಅಧಿಕಾರಿಗಳು ಜಿಲ್ಲೆಯಲ್ಲಿ ಇರುವ ಗ್ರಾಮೀಣ ಭಾಗಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಘಟಕಗಳಿಗೆ ಭೇಟಿ ನೀಡಿ ವಿವಿಧ ಯೋಜನೆಗಳ ಬಗ್ಗೆ ಮಾಹಿತಿಯನ್ನು ನೀಡಿ ಸಾಲ ಸೌಲಭ್ಯಗಳನ್ನು ಪಡೆಯಲು ಅನುಕೂಲ / ಸೂಕ್ತ ಮಾರ್ಗದರ್ಶನ ನೀಡುತ್ತಾರೆ.<br><br>ಶಾಖಾ ಕಚೇರಿಗಳು ಸಂಬಂಧಪಟ್ಟ ಲೀಡ್ ಬ್ಯಾಂಕ್, ಜಿಲ್ಲಾ ಕೈಗಾರಿಕಾ ಕೇಂದ್ರ ಹಾಗೂ ಖಾಸಗಿ ಸಂಘ ಸಂಸ್ಥೆಗಳೊಂದಿಗೆ ವಿವಿಧ ಕಾರ್ಯಾಗಾರಗಳು, ಸೆಮಿನಾರ್ ಹಾಗೂ ಸಮ್ಮೇಳನಗಳಲ್ಲಿ ಭಾಗವಹಿಸಿ ಸಂಸ್ಥೆಯು ಅತಿಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ಲಭ್ಯವಿರುವ ವಿವಿಧ ಯೋಜನೆಗಳ ಮಾಹಿತಿಯನ್ನು ನೀಡಲಾಗುತ್ತಿದೆ. ಇದಲ್ಲದೇ ಶಾಖಾ ಕಚೇರಿಗಳು ಉದ್ಯಮಿಗಳಿಗೆ / ಗ್ರಾಹಕರಿಗೆ ಕೈಗಾರಿಕೋದ್ಯಮದ ಬಗ್ಗೆ ಅರಿವು ಮೂಡಿಸುವ ಕಾರ್ಯಾಗಾರಗಳನ್ನು ಪ್ರತ್ಯಕ್ಷವಾಗಿ ನಡೆಸಲಾಗುತ್ತದೆ.<br>ಸಂಸ್ಥೆಯು ರಾಜ್ಯದ ಪ್ರಮುಖ ಕನ್ನಡ ಮತ್ತು ಆಂಗ್ಲ ಭಾಷೆಗಳ ದಿನಪತ್ರಿಕೆಗಳಲ್ಲಿ ವಿವಿಧ ಯೋಜನೆಗಳ ಮಾಹಿತಿಯ ಜಾಹೀರಾತುಗಳನ್ನು ನೀಡುತ್ತಿದೆ.<br>ಸಂಸ್ಥೆಯ ವಿವಿಧ ಸಾಲ ಯೋಜನೆಗಳ ಸಂಪೂರ್ಣ ಮಾಹಿತಿಯು ಸಂಸ್ಥೆಯ ಜಾಲತಾಣ; www.ksfc.karnataka.gov.in ನಲ್ಲಿ ಲಭ್ಯವಿದೆ. |

ಸಂಖ್ಯೆ: ಆಇ 19 ಬಿಎಫ್‌ಸಿ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ-1

## ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ

## ಕಳೆದ ಮೂರು ವರ್ಷಗಳಲ್ಲಿ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿಗೆ ನೀಡಿರುವ ನೆರವಿನ ವಿವರ

(ಮೊತ್ತ ಲಕ್ಷ ರೂ.ಗಳಲ್ಲಿ)

| ಜಿಲ್ಲೆಗಳು | 2019-20 | | | | | | 2020-21 | | | | | | 2021-22 (ಏಪ್ರಿಲ್ 2021ರಿಂದ ಜನವರಿ 2022ರವರೆಗೆ) | | | | | |
|---|---|---|---|---|---|---|---|---|---|---|---|---|---|---|---|---|---|---|
| | ಅತಿ ಸಣ್ಣ ಘಟಕಗಳು | | ಸಣ್ಣ ಘಟಕಗಳು | | ಮಧ್ಯಮ ಪ್ರಮಾಣದ | | ಅತಿ ಸಣ್ಣ ಘಟಕಗಳು | | ಸಣ್ಣ ಘಟಕಗಳು | | ಮಧ್ಯಮ ಪ್ರಮಾಣದ | | ಅತಿ ಸಣ್ಣ ಘಟಕಗಳು | | ಸಣ್ಣ ಘಟಕಗಳು | | ಮಧ್ಯಮ ಪ್ರಮಾಣದ | |
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಬೆಂಗಳೂರು ನಗರ | 5 | 191.10 | 82 | 8975.00 | 2 | 750.00 | 1 | 118.00 | 38 | 3408.75 | | | 2 | 150.00 | 36 | 3956.00 | 1 | 60.00 |
| ಬೆಂಗಳೂರು ಗ್ರಾಮಾಂತರ | | | 31 | 4181.80 | | | 1 | 100.00 | 13 | 1558.00 | 1 | 300.00 | 1.00 | 195.00 | 12 | 1501.50 | | |
| ರಾಮನಗರ | 3 | 50.75 | 18 | 2348.55 | | | 1 | 70.00 | 11 | 1000.00 | | | 3 | 225.00 | 4 | 870.00 | | |
| ತುಮಕೂರು | 1 | 50.00 | 34 | 2961.80 | | | 13 | 546.00 | 14 | 1685.00 | 1 | 300.00 | 7 | 384.00 | 9 | 1402.00 | | |
| ಕೋಲಾರ | 1 | 35.00 | 18 | 3238.20 | | | 1 | 65.70 | 20 | 2517.00 | | | 9 | 663.00 | 10 | 1961.50 | | |
| ಚಿಕ್ಕಬಳ್ಳಾಪುರ | | | 10 | 1367.00 | | | 1 | 19.25 | 3 | 564.00 | | | 2 | 72.00 | 3 | 287.05 | | |
| ಮೈಸೂರು | 1 | 5.00 | 46 | 4067.00 | | | 6 | 175.00 | 33 | 3791.00 | | | 10 | 774.00 | 7 | 1464.00 | | |
| ಮಂಡ್ಯ | 2 | 39.00 | 8 | 766.00 | 1 | 40.00 | 6 | 214.50 | 4 | 500.00 | 1 | 65.00 | 7 | 424.50 | 2 | 270.00 | | |
| ಕೊಡಗು | 1 | 22.00 | 7 | 578.00 | | | 2 | 46.00 | 9 | 766.62 | | | 1 | 19.45 | 3 | 489.00 | | |
| ಚಾಮರಾಜನಗರ | 2 | 18.75 | 8 | 527.00 | | | 12 | 835.00 | 1 | 18.00 | | | 2 | 36.00 | 3 | 372.62 | | |
| ದಕ್ಷಿಣ ಕನ್ನಡ | 2 | 16.00 | 14 | 626.00 | 2 | 835.00 | 3 | 49.00 | 8 | 729.00 | 1 | 60.00 | 0.00 | 0.00 | 2 | 525.00 | 2 | 115.00 |
| ಉಡುಪಿ | 1 | 7.50 | 8 | 675.00 | | | 3 | 158.00 | 3 | 210.00 | | | 2 | 70.00 | 5 | 450.00 | | |
| ಹಾಸನ | 7 | 160.50 | 27 | 2536.80 | | | 9 | 216.00 | 23 | 1006.00 | | | 2 | 150.00 | 8 | 346.00 | | |
| ಚಿಕ್ಕಮಗಳೂರು | 2 | 16.25 | 11 | 1327.00 | 1 | 200.00 | 6 | 321.50 | 7 | 249.15 | | | 2 | 202.70 | 2 | 522.00 | | |
| ಧಾರವಾಡ | 1 | 30.00 | 42 | 2655.00 | 1 | 290.00 | 3 | 115.00 | 19 | 1724.70 | | | 4 | 220.00 | 9 | 1069.00 | | |
| ಹಾವೇರಿ | 6 | 143.00 | 9 | 356.50 | | | 5 | 101.40 | 3 | 179.00 | | | 2 | 43.00 | 4 | 329.90 | | |
| ಗದಗ | 2 | 91.00 | 13 | 982.00 | | | 1 | 100.00 | 5 | 289.00 | | | 1 | 22.00 | 3 | 557.00 | | |
| ಉತ್ತರಕನ್ನಡ | 6 | 133.00 | 12 | 1165.50 | | | | | 2 | 250.00 | | | 1 | 30.00 | 1 | 198.00 | | |
| ಚಿತ್ರದುರ್ಗ | 3 | 59.00 | 24 | 1036.00 | | | 9 | 303.00 | 8 | 780.00 | | | | 0.00 | 4 | 268.50 | | |
| ಶಿವಮೊಗ್ಗ | 3 | 32.00 | 12 | 750.00 | 1 | 74.00 | 6 | 343.90 | 2 | 49.00 | | | 2 | 109.00 | 9 | 561.75 | | |
| ಬೆಳಗಾವಿ | | | 26 | 2270.50 | 1 | 489.00 | | | 16 | 1309.00 | | | 1 | 30.00 | 8 | 1322.00 | | |
| ಬಾಗಲಕೋಟೆ | 3 | 94.00 | 18 | 1715.00 | | | 1 | 35.00 | 15 | 1301.30 | | | 1 | 20.00 | 7 | 547.85 | | |
| ಕಲಬುರಗಿ | 11 | 289.00 | 24 | 3617.50 | | | 4 | 360.00 | 16 | 1680.00 | | | 2 | 55.00 | 1 | 63.00 | | |
| ಯಾದಗಿರಿ | 1 | 20.00 | 12 | 894.00 | | | | | 5 | 547.00 | 1 | 50.00 | | 0.00 | 1 | 75.00 | | |
| ರಾಯಚೂರು | 1 | 40.00 | 7 | 822.00 | | | 2 | 78.00 | 6 | 1038.00 | | | 1 | 72.00 | 5 | 684.00 | | |
| ಬೀದರ್ | 7 | 244.00 | 14 | 2023.00 | 1 | 500.00 | 11 | 381.50 | 24 | 2078.00 | | | 8 | 393.00 | 3 | 264.00 | | |
| ಕೊಪ್ಪಳ | 1 | 65.00 | 15 | 1699.00 | 1 | 480.00 | | | 12 | 857.00 | | | 1 | 62.00 | 5 | 468.00 | | |
| ಬಳ್ಳಾರಿ | | | 6 | 1449.50 | | | 1 | 60.00 | 5 | 581.00 | | | 1 | 35.00 | 4 | 215.00 | | |
| ದಾವಣಗೆರೆ | 7 | 261.50 | 11 | 700.00 | | | 9 | 424.00 | 3 | 375.30 | | | 4 | 310.00 | 9 | 819.20 | 1 | 69.00 |
| ವಿಜಯಪುರ | | | 28 | 1983.54 | | | | | 28 | 1434.00 | | | 0 | 0 | 12 | 796.00 | 1 | 23.00 |
| ಒಟ್ಟು | 80 | 2113.35 | 595 | 58294.19 | 11 | 3658.00 | 117 | 5235.75 | 356 | 32474.82 | 5 | 775.00 | 79 | 4766.65 | 191 | 22654.87 | 5 | 267.00 |

## ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ

ಅನುಬಂಧ-2

ರಾಜ್ಯ ಸರ್ಕಾರದ ಬಡ್ಡಿ ಸಹಾಯಧನ ಯೋಜನೆಗಳಲ್ಲಿ ಸಂಸ್ಥೆಯು ಕಳೆದ ಮೂರು ವರ್ಷಗಳಲ್ಲಿ ನೀಡಿರುವ ನೆರವಿನ ವಿವರಗಳು ಈ ಕೆಳಕಂಡಂತಿವೆ :

(ಮೊತ್ತ ಲಕ್ಷ ರೂ.ಗಳಲ್ಲಿ)

| ಯೋಜನೆಗಳು | 2019-20 | | 2020-21 | | 2021-22 (ಏಪ್ರಿಲ್ 2021ರಿಂದ ಜನವರಿ 2022ರವರೆಗೆ) | |
|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಪರಿಶಿಷ್ಟ ಜಾತಿ | 169 | 11253.00 | 150 | 125.99 | 88 | 7775.45 |
| ಪರಿಶಿಷ್ಟ ಪಂಗಡ | 52 | 3539.00 | 42 | 3503.00 | 25 | 2012.58 |
| ಮಹಿಳಾ ಉದ್ದಿಮೆದಾರರು | 165 | 14515.30 | 8 | 1100.00 | 1 | 72.00 |
| ಮೊದಲನೇ ಪೀಳಿಗೆ ಉದ್ದಿಮೆದಾರರಿಗೆ | -- | 415.48 | -- | 337.88 | -- | -- |
| ಎಲ್ಲಾ ವರ್ಗದ ಉದ್ದಿಮೆದಾರರಿಗೆ ಅತಿ ಸಣ್ಣ ಮತ್ತು ಸಣ್ಣ ಪ್ರಮಾಣದ ಘಟಕಗಳನ್ನು ಸ್ಥಾಪಿಸಲು ಬಡ್ಡಿ ಸಹಾಯಧನ | 262 | 26285.50 | 189 | 18455.66 | 142 | 16041.32 |

-----